# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2073
ಉತ್ತರಿಸಬೇಕಾಗಿದ್ದ ದಿನಾಂಕ : 27.03.2020
ಸದಸ್ಯರ ಹೆಸರು : ಶ್ರೀ ಎಸ್. ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ 3 ವರ್ಷಗಳಿಂದ ಕ್ರೀಡಾ ವಸತಿ ಶಾಲೆಗಳಿಗೆ ನೀಡಿರುವ ಅನುದಾನದ ವಿವರ ನೀಡುವುದು; | ಕಳೆದ ಮೂರು ವರ್ಷಗಳಲ್ಲಿ ಕ್ರೀಡಾ ವಸತಿ ಶಾಲೆಗಳಿಗೆ ನೀಡಿದ ಅನುದಾನದ ವಿವರ ಕೆಳಕಂಡಂತಿದೆ.<br><table><tr><th>ಕ್ರ ಸಂ</th><th>ವರ್ಷ</th><th>ಆಯವ್ಯಯ ಹಂಚಿಕೆ (ರೂ ಲಕ್ಷಗಳಲ್ಲಿ)</th></tr><tr><td>1</td><td>2017-18</td><td>1800.00</td></tr><tr><td>2</td><td>2018-19</td><td>2160.00</td></tr><tr><td>3</td><td>2019-20</td><td>1700.00</td></tr></table> |
| ಆ | ಕ್ರೀಡಾ ವಸತಿ ಶಾಲೆಗಳಿಗೆ ಯಾವ ಮಾನದಂಡ/ನಿಯಮಗಳ ಮೇಲೆ ಕ್ರೀಡಾಪಟುಗಳನ್ನು ಆಯ್ಕೆ ಮಾಡಿಕೊಳ್ಳಲಾಗುತ್ತದೆ; (ವಿವರ ನೀಡುವುದು) | ದೈಹಿಕ ಕ್ಷಮತೆ ಮತ್ತು ಆಯಾ ಕ್ರೀಡೆಗೆ ಸಂಬಂಧಿಸಿದ ಕೌಶಲ್ಯ ಪರೀಕ್ಷೆಗಳನ್ನು ಆಧರಿಸಿ ಕ್ರೀಡಾ ವಸತಿ ಶಾಲೆ/ ನಿಲಯಗಳಿಗೆ ಕ್ರೀಡಾಪಟುಗಳನ್ನು ಆಯ್ಕೆ ಮಾಡಲಾಗುವುದು. ಅಲ್ಲದೇ, ಸಾಧಕ ಕ್ರೀಡಾಪಟುಗಳಿಗೆ ಕ್ರೀಡಾ ವಸತಿ ಶಾಲೆ/ನಿಲಯಗಳಿಗೆ ನೇರ ಪ್ರವೇಶಕ್ಕೆ ಅವಕಾಶ ಕಲ್ಪಿಸಲಾಗಿದೆ. |
| ಇ | ರಾಜ್ಯದ ಎಲ್ಲಾ ಕ್ರೀಡಾ ವಸತಿ ಶಾಲೆಗಳಲ್ಲಿ ಮೂಲಭೂತ ಸೌಕರ್ಯ ಒದಗಿಸಲಾಗಿದೆಯೇ; ಕೊರತೆ ಇದ್ದಲ್ಲಿ ಸರ್ಕಾರದಿಂದ ಏನು ಕ್ರಮ ಕೈಗೊಳ್ಳಲಾಗಿದೆ; | ರಾಜ್ಯದ ಎಲ್ಲಾ ಕ್ರೀಡಾ ವಸತಿ ಶಾಲೆ/ನಿಲಯಗಳಲ್ಲಿ ಕ್ರೀಡಾಪಟುಗಳ ವಾಸ್ತವ್ಯ ಹಾಗೂ ಕ್ರೀಡಾ ತರಬೇತಿಗೆ ಅಗತ್ಯವಾದ ಕನಿಷ್ಠ ಮೂಲಸೌಕರ್ಯಗಳನ್ನು ಕಲ್ಪಿಸಲಾಗಿದೆ. ಹೆಚ್ಚುವರಿ ಸೌಲಭ್ಯಗಳನ್ನು ಕಲ್ಪಿಸಿ, ಕ್ರೀಡಾ ವಸತಿ ನಿಲಯಗಳ ಸೌಲಭ್ಯಗಳನ್ನು ಮೇಲ್ದರ್ಜೆಗೇರಿಸಲು ಹಂತ-ಹಂತವಾಗಿ ಕ್ರಮ ವಹಿಸಲಾಗುತ್ತಿದೆ.<br><br>ಕ್ರೀಡಾಪಟುಗಳಿಗೆ ವಾಸ್ತವ್ಯಕ್ಕಾಗಿ ಹೊಸ ವಸತಿ ನಿಲಯ ಕಟ್ಟಡಗಳ ನಿರ್ಮಾಣ, ಹಳೆಯ ವಸತಿ ನಿಲಯ ಕಟ್ಟಡಗಳ ನವೀಕರಣ, ಅಡುಗೆ ಮನೆ-ಊಟದ ಹಾಲ್ ನವೀಕರಣ, ಆಹಾರ ಪದಾರ್ಥಗಳ ಆಧುನಿಕ ವ್ಯವಸ್ಥೆ, ಹೆಚ್ಚುವರಿ ಶೌಚಾಲಯ ಮತ್ತು ಸ್ನಾನ ಗೃಹಗಳ ನಿರ್ಮಾಣ, ಓದಲು-ಬರೆಯಲು ಟೇಬಲ್, ಕುರ್ಚಿ, ವಾಷಿಂಗ್ ಮಷಿನ್‌ಗಳ ಅಳವಡಿಕೆ, ಕ್ರೀಡಾ ತರಬೇತಿಗೆ |

| | | |
|---|---|---|
| | | ಅಗತ್ಯವಾದ ಆಧುನಿಕ ಕ್ರೀಡೋಪಕರಣಗಳು, ಕ್ರೀಡಾ ವಿಜ್ಞಾನ ಕೇಂದ್ರ ಮತ್ತಿತರ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ. |
| ಈ | ಎಲ್ಲಾ ಆಟಗಳಿಗೆ ತರಬೇತುದಾರರನ್ನು ನೇಮಿಸಲಾಗಿದೆಯೇ; ಖಾಯಂ/ಗುತ್ತಿಗೆ ನೌಕರರ ಸಂಖ್ಯೆ ಎಷ್ಟು? (ವಿವರ ನೀಡುವುದು) | ರಾಜ್ಯದ ವಿವಿಧ ಭಾಗಗಳಲ್ಲಿ ಒಟ್ಟು 34 ಕ್ರೀಡಾ ವಸತಿ ಶಾಲೆ/ನಿಲಯಗಳು ಕಾರ್ಯ ನಿರ್ವಹಿಸುತ್ತಿದ್ದು, 14 ವಿವಿಧ ಕ್ರೀಡೆಗಳಲ್ಲಿ ತರಬೇತಿ ನೀಡಲಾಗುತ್ತಿದೆ. ಆಯಾ ಕ್ರೀಡಾ ವಸತಿ ಶಾಲೆ/ನಿಲಯಗಳಿಗೆ ನಿಗಧಿಪಡಿಸಿರುವ ಕ್ರೀಡೆಯ ಕ್ರೀಡಾಪಟುಗಳಿಗೆ ಪ್ರವೇಶ ನೀಡಲಾಗುತ್ತಿದ್ದು, ಕ್ರೀಡಾ ತರಬೇತುದಾರರ ಸೇವೆ ಒದಗಿಸಲಾಗಿದ್ದು, ಕ್ರೀಡಾ ತರಬೇತಿ ನೀಡಲಾಗುತ್ತಿದೆ. ನಾಲ್ಕು ಜಿಲ್ಲಾ ಕ್ರೀಡಾ ವಸತಿ ನಿಲಯಗಳಲ್ಲಿ ಫುಟ್ಬಾಲ್ ತರಬೇತುದಾರರ ಕೊರತೆ ಇರುತ್ತದೆ.<br><br>ಕ್ರೀಡಾ ವಸತಿ ಶಾಲೆ/ನಿಲಯಗಳಲ್ಲಿ ಕರ್ನಾಟಕ ಕ್ರೀಡಾ ಪ್ರಾಧಿಕಾರದ ಮಾಸಿಕ ಸಂಚಿತ ವೇತನ ಆಧಾರದಲ್ಲಿ ಸೇವೆಯಲ್ಲಿರುವ 50 ಜನ ತರಬೇತುದಾರರು ಹಾಗೂ 53 ಜನ ಗುತ್ತಿಗೆ ಆಧಾರದಲ್ಲಿ ಸೇವೆಯಲ್ಲಿರುವ ತರಬೇತುದಾರರು ಕಾರ್ಯ ನಿರ್ವಹಿಸುತ್ತಿದ್ದಾರೆ. ಪೊಲೀಸ್ ಇಲಾಖೆಯಿಂದ ಒಬ್ಬರು ನಿಯೋಜನೆ ಮೇಲೆ ತರಬೇತುದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. |

**ವೈಎಸ್ ಡಿ-/ಇಬಿಬಿ/72/2020**

**(ಸಿ. ಟಿ. ರವಿ)**

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ
ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.